# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 898
ಸದಸ್ಯರ ಹೆಸರು : ಶ್ರೀ ಹೆಚ್.ಎಂ ರಮೇಶ ಗೌಡ
ಉತ್ತರಿಸುವ ದಿನಾಂಕ : 10.03.2021.
ಉತ್ತರಿಸುವ ಸಚಿವರು : ಸಮಾಜ ಕಲ್ಯಾಣ ಸಚಿವರು

<table>
<tr><th>ಕ್ರ. ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ರಾಜ್ಯಾದ್ಯಂತ ಕಳೆದೆರೆಡು ವರ್ಷಗಳಿಂದ ಸಮಾಜ ಕಲ್ಯಾಣ ಇಲಾಖೆಯಡಿ ನಡೆಸಲಾದ ಕಾರ್ಯಕ್ರಮಗಳಿಗೆ ಬಿಡುಗಡೆಯಾದ ಅನುದಾನವೆಷ್ಟು: ಖರ್ಚಾದ ಹಣವೆಷ್ಟು: (ಮಾಹಿತಿ ನೀಡುವುದು)</td><td>ಸಮಾಜ ಕಲ್ಯಾಣ ಇಲಾಖೆಯಡಿ ಕಳೆದೆರೆಡು ವರ್ಷಗಳಲ್ಲಿ ವಿವಿಧ ಕಾರ್ಯಕ್ರಮಗಳಡಿ ಬಿಡುಗಡೆಯಾದ ಅನುದಾನ ಮತ್ತು ಖರ್ಚಾದ ಅನುದಾನದ ವಿವರಗಳು ಈ ಕೆಳಗಿನಂತಿದೆ.<br>ಪರಿಶಿಷ್ಟ ಜಾತಿಯವರ ಕಲ್ಯಾಣಕ್ಕಾಗಿ<br>(ರೂ.ಲಕ್ಷಗಳಲ್ಲಿ)
<table>
<tr><th>ವರ್ಷ</th><th>ಬಿಡುಗಡೆಯಾದ ಅನುದಾನ</th><th>ಖರ್ಚಾದ ಅನುದಾನ</th></tr>
<tr><td>2018-19</td><td>517302.74</td><td>516158.55</td></tr>
<tr><td>2019-20</td><td>418857.83</td><td>413959.62</td></tr>
</table>
ಪರಿಶಿಷ್ಟ ವರ್ಗಗಳ ಕಲ್ಯಾಣಕ್ಕಾಗಿ<br>(ರೂ.ಲಕ್ಷಗಳಲ್ಲಿ)
<table>
<tr><th>ವರ್ಷ</th><th>ಬಿಡುಗಡೆಯಾದ ಅನುದಾನ</th><th>ಖರ್ಚಾದ ಅನುದಾನ</th></tr>
<tr><td>2018-19</td><td>167128.86</td><td>163513.81</td></tr>
<tr><td>2019-20</td><td>131814.17</td><td>128154.23</td></tr>
</table></td></tr>
<tr><td>ಆ)</td><td>ಸಮಾಜ ಕಲ್ಯಾಣ ಇಲಾಖೆಯ ಅಧಿಕಾರಿಗಳು ಗ್ರಾಮೀಣ ಭಾಗದ ಯುವಕ ಯುವತಿಯರಿಗೆ ವಿಶೇಷ ಯೋಜನೆಗಳು ಮತ್ತು ರಚನಾತ್ಮಕ ಕಾರ್ಯಕ್ರಮಗಳ ತರಬೇತಿ ನೀಡುತ್ತಾರೆಯೇ:</td><td>ಹೌದು.</td></tr>
<tr><td>ಇ)</td><td>ಕೆಲವು ಜಿಲ್ಲೆಗಳಲ್ಲಿ ಸಮಾಜ ಕಲ್ಯಾಣ ಇಲಾಖೆ ಅತ್ಯಂತ ನಿಷ್ಕ್ರಿಯವಾಗಿದೆ' ಎನ್ನುವ ದೂರುಗಳು ಬಂದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;</td><td>ಬಂದಿಲ್ಲ.</td></tr>
<tr><td>ಈ)</td><td>ಸಮಾಜ ಕಲ್ಯಾಣ ಇಲಾಖೆಯಡಿ ಸಾಮಾಜಿಕ ಅಭಿವೃದ್ಧಿಗೆ ಯಾವ ಯೋಜನೆ ರೂಪಿಸಲಾದೆ? (ವಿವರ ನೀಡುವುದು)</td><td>ಅನುಬಂಧ-1ರಲ್ಲಿ ಒದಗಿಸಲಾಗಿದೆ.</td></tr>
</table>

ಸಂಖ್ಯೆ: ಸಕಇ 38 ಆರ್&ಐ 2021

(ಬಿ.ಶ್ರೀರಾಮುಲು)
ಸಮಾಜ ಕಲ್ಯಾಣ ಸಚಿವರು.

# ಅನುಬಂಧ-1

ಸಮಾಜ ಕಲ್ಯಾಣ ಇಲಾಖೆಯಡಿ ಸಾಮಾಜಿಕ ಅಭಿವೃದ್ಧಿಗೆ ಈ ಕೆಳಕಂಡ ಯೋಜನೆಗಳನ್ನು ರೂಪಿಸಲಾಗಿದೆ.

- **ಪರಿಶಿಷ್ಟ ಜಾತಿಯವರಿಗಾಗಿ ರೂಪಿಸಲಾದ ಯೋಜನೆಗಳು:-**

1. ಅಂತರ್ಜಾತಿ ವಿವಾಹ
2. ಸರಳ ವಿವಾಹ
3. ಒಳಪಂಗಡಗಳ ಅಂತರ್ಜಾತಿ ವಿವಾಹ
4. ವಿಧವಾ ಮರು ವಿವಾಹ
5. ದೇವದಾಸಿ ಮಕ್ಕಳ ವಿವಾಹ

ಮುಂತಾದ ಕಾರ್ಯಕ್ರಮಗಳಿಗೆ ಪ್ರೋತ್ಸಾಹಧನ ಹಾಗೂ ಅಸ್ಪೃಶ್ಯತೆಯ ನಿವಾರಣೆಗಾಗಿ ಅರಿವು ಮೂಡಿಸುವ ಮುಂತಾದ ಕಾರ್ಯಕ್ರಮಗಳನ್ನು ಜಾರಿಗೊಳಿಸಲಾಗುತ್ತಿದೆ.

- **ಪರಿಶಿಷ್ಟ ಪಂಗಡದವರಿಗಾಗಿ ರೂಪಿಸಲಾದ ಯೋಜನೆಗಳು:-**

1) **ಸರಳ ವಿವಾಹ:** ಪರಿಶಿಷ್ಟ ಪಂಗಡದವರ ಅಭಿವೃದ್ಧಿಗಾಗಿ ಇಲಾಖಾ ಆದ್ಯತಾ ಕಾರ್ಯಕ್ರಮವಾದ ಸಾಮೂಹಿಕ ಸರಳ ಕಾರ್ಯಕ್ರಮದಡಿ ಪರಿಶಿಷ್ಟ ಪಂಗಡದ ದಂಪತಿಗಳು ಸಾಮೂಹಿಕ ಸರಳ ವಿವಾಹಗಳಲ್ಲಿ ಸರಳವಾಗಿ ವಿವಾಹ ಮಾಡಿಕೊಂಡ ದಂಪತಿಗಳಿಗೆ ರೂ.50,000/- ಪ್ರೋತ್ಸಾಹಧನವನ್ನು ನೀಡಲಾಗುತ್ತಿದೆ.

2) **ವಿಧವಾ ವಿವಾಹ:** ಈ ಕಾರ್ಯಕ್ರಮದಡಿ ಪರಿಶಿಷ್ಟ ಪಂಗಡದ ವಿಧವೆಯರು ಮರು ವಿವಾಹವಾದ್ದಲ್ಲಿ ಅಂತಹವರಿಗೆ ರೂ.3.00 ಲಕ್ಷಗಳ ಪ್ರೋತ್ಸಾಹಧನ ನೀಡಲಾಗುತ್ತಿದೆ.

3) **ಒಳ ಪಂಗಡ ವಿವಾಹ:** ಪರಿಶಿಷ್ಟ ಪಂಗಡದ ಯುವಕ/ಯುವತಿಯರು ಪರಿಶಿಷ್ಟ ಪಂಗಡದ ಒಳಗೆ ಅಂತರ್ಜಾತಿ ವಿವಾಹವಾದ್ದಲ್ಲಿ ಅಂತಹವರಿಗೆ ರೂ.2.00 ಲಕ್ಷಗಳ ಪ್ರೋತ್ಸಾಹಧನವನ್ನು ನೀಡಲಾಗುತ್ತಿದೆ.

4) **ಅಂತರ್ಜಾತಿ ವಿವಾಹ:-** ಪರಿಶಿಷ್ಟ ಪಂಗಡದ ಯುವಕ ಯುವತಿಯರು ಅನ್ಯಜಾತಿಯ ಯುವಕ/ಯುವತಿಯನ್ನು ವಿವಾಹವಾದಲ್ಲಿ ಅಂತಹ ಪುರುಷರಿಗೆ ರೂ.2.50 ಲಕ್ಷ ಮತ್ತು ಮಹಿಳೆಯರಿಗೆ ರೂ.3.00 ಲಕ್ಷಗಳ ಪ್ರೋತ್ಸಾಹಧನ ನೀಡಲಾಗುವುದು.

- **ಕರ್ನಾಟಕ ರಾಜ್ಯ ಸಫಾಯಿ ಕರ್ಮಚಾರಿಗಳ ಅಭಿವೃದ್ಧಿ ನಿಗಮಗಳಿಂದ ಸಫಾಯಿ ಕರ್ಮಚಾರಿ ಮತ್ತು ಮ್ಯಾನ್ಯುಯಲ್ ಸ್ಕ್ಯಾವೆಂಜರ್‌ಗಳ ಅಭಿವೃದ್ಧಿ ಮತ್ತು ಪುನರ್ ವಸತಿಗಾಗಿ ರೂಪಿಸಲಾದ ಯೋಜನೆಗಳು:-**

1. ಜೀವನ್ ಸುರಕ್ಷಾ ವಿಮಾ ಯೋಜನೆ.
2. ಆರೋಗ್ಯ ಜಾಗೃತಿ ಮೂಡಿಸಲು ಆರೋಗ್ಯ ಶಿಬಿರಗಳು.
3. ಮೂಲಭೂತ ಸೌಕರ್ಯಗಳು.
4. ಇತ್ಯಾದಿ ಅಭಿವೃದ್ಧಿ ಯೋಜನೆಗಳು.

****